# ಕರ್ನಾಟಕ ವಿಧಾನ ಪರಿಷತ್ತು

**ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ** : **838**
**ಸದಸ್ಯರ ಹೆಸರು** : ಶ್ರೀ ಬಿ.ಕೆ.ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು)
**ಉತ್ತರಿಸಬೇಕಾದ ದಿನಾಂಕ** : 20.09.2021
**ಉತ್ತರಿಸುವ ಸಚಿವರು** : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು.

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಗ್ರಾಮೀಣ ಭಾಗಗಳಲ್ಲಿ ಅಧಿಕ ಸಾಮಾರ್ಥ್ಯವಿರುವ ಅಥವಾ ಹೆಚ್ಚುವರಿ ಪರಿವರ್ತಕ (ಟ್ರಾನ್ಸ್‌ಫಾರ್ಮರ್)ಗಳನ್ನು ಅಳವಡಿಸದಿರುವುದರಿಂದ ಒತ್ತಡ ಹೆಚ್ಚಾಗಿ ವಿದ್ಯುತ್ ಸಂಪರ್ಕದಲ್ಲಿ ವ್ಯತ್ಯಯವಾಗಿ ಪದೇ ಪದೇ ವಿದ್ಯುತ್ ಕಡಿತಗೊಂಡು ಸಮಸ್ಯೆ ಆಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ರಾಜ್ಯದ ವಿದ್ಯುತ್ ಸರಬರಾಜು ಕಂಪನಿಗಳ ವ್ಯಾಪ್ತಿಗೆ ಒಳಪಡುವ ಗ್ರಾಮೀಣ ಭಾಗಗಳಲ್ಲಿ ಮಂಜೂರಾದ ವಿದ್ಯುತ್ ಭಾರಕ್ಕೆ ತಕ್ಕಂತೆ ಪರಿವರ್ತಕಗಳನ್ನು ಅಳವಡಿಸಲಾಗುತ್ತದೆ.<br><br>ಗ್ರಾಮೀಣ ಭಾಗಗಳಲ್ಲಿ ಹಾಲಿ ಇರುವ ಪರಿವರ್ತಕಗಳ ಮೇಲೆ ಅಧಿಕ ಹೊರೆ ಇದ್ದಲ್ಲಿ ಬಂಡವಾಳ ವೆಚ್ಚ (CAPEX) ಕಾಮಗಾರಿಯಡಿಯಲ್ಲಿ ಹಾಗೂ ವಿವಿಧ ಯೋಜನೆಯಡಿಯಲ್ಲಿ ಅಧಿಕ ಸಾಮರ್ಥ್ಯದ ಪರಿವರ್ತಕ ಅಥವಾ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಲಾಗುತ್ತಿದೆ. |
| ಆ) | ಕೃಷಿ ಕಾರ್ಯಕ್ಕೆ ಪಂಪುಗಳನ್ನು ಬಳಸುವುದರಿಂದ ಅಧಿಕ ವಿದ್ಯುತ್ತಿನ ಪ್ರಸರಣ ಆಗುವುದರಿಂದ, ಹೆಚ್ಚಿನ ಸಾಮರ್ಥ್ಯವಿರುವ ಟ್ರಾನ್ಸ್ ಫಾರ್ಮರಗಳನ್ನು ಅಳವಡಿಸುವಲ್ಲಿ ಇಲಾಖೆಯ ನಿಲುವೇನು; | ಹಾಲಿ ಇರುವ ಪರಿವರ್ತಕಗಳು ವಿಫಲವಾದ ಸಮಯದಲ್ಲಿ ಅವುಗಳನ್ನು ಬದಲಾಯಿಸುವ ತನಕ ಪರ್ಯಾಯ ಪೂರೈಕೆಯಿಂದ ವಿದ್ಯುತ್ ಸರಬರಾಜು ವ್ಯವಸ್ಥೆ ಮಾಡಲಾಗುತ್ತಿದೆ. ಒತ್ತಡ ಹೆಚ್ಚಾಗಿ ವಿದ್ಯುತ್ ಸಂಪರ್ಕದಲ್ಲಿ ಸಾರ್ವಜನಿಕರಿಗೆ ತೊಂದರೆಯಾಗದಂತೆ ಕ್ರಮ ಕೈಗೊಳ್ಳಲಾಗುತ್ತಿದೆ. |
| ಇ) | ಈ ಕುರಿತು ಗ್ರಾಮೀಣ ಭಾಗಗಳಲ್ಲಿ ಸರ್ವೆ ನಡೆಸಿ ಅವಶ್ಯಕತೆ ಇರುವ ಭಾಗಗಳಲ್ಲಿ ಅಧಿಕ ಸಾಮರ್ಥ್ಯವಿರುವ ಟ್ರಾನ್ಸ್ ಫಾರ್ಮರಗಳನ್ನು ಅಳವಡಿಸಲು ಸರ್ಕಾರದ ತೊಡಕುಗಳೇನು? | ಕೃಷಿ ಪಂಪ್‌ಸೆಟ್‌ಗಳಿಗೆ ಸಂಬಂಧಿಸಿದಂತೆ, ವಿವಿಧ ಯೋಜನೆಗಳಡಿ ಅಧಿಕ ಸಾಮರ್ಥ್ಯದ ಹಾಗೂ ಹೆಚ್ಚುವರಿ ಪರಿವರ್ತಕಗಳನ್ನು ಅಳವಡಿಸಿರುವ ವಿದ್ಯುತ್ ಸರಬರಾಜು ಕಂಪನಿವಾರು ವಿವರಗಳು ಈ ಕೆಳಕಂಡಂತಿವೆ:- |

| ಕ್ರ. ಸಂ | ಕಂಪನಿ ಹೆಸರು | 2021-22 (ಆಗಸ್ಟ್-2021 ರ ಅಂತ್ಯಕ್ಕೆ) |
|---|---|---|
| 1 | ಬೆಸ್ಕಾಂ | 7958 |
| 2 | ಮೆಸ್ಕಾಂ | 2215 |
| 3 | ಸೆಸ್ಕ್ | 3296 |
| 4 | ಹೆಸ್ಕಾಂ | 6381 |
| 5 | ಜೆಸ್ಕಾಂ | 1126 |

ಗ್ರಾಮೀಣ ಭಾಗಗಳಲ್ಲಿ ಸರ್ವೆ ನಡೆಸಿ ಅವಶ್ಯಕತೆ ಇರುವ ಭಾಗಗಳಲ್ಲಿ ಅಧಿಕ ಸಾಮರ್ಥ್ಯದ ಹಾಗೂ ಹೆಚ್ಚುವರಿ ಟ್ರಾನ್ಸ್‌ಫಾರ್ಮರ್‌ಗಳನ್ನು ಅಳವಡಿಸಲಾಗುತ್ತಿದೆ.

ಸಂಖ್ಯೆ: ಎನರ್ಜಿ 217 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ
ಮತ್ತು ಸಂಸ್ಕೃತಿ ಸಚಿವರು.

## ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **836**

ಸದಸ್ಯರ ಹೆಸರು : ಶ್ರೀ ಬಿ.ಕೆ.ಹರಿಪ್ರಸಾದ್ (ವಿಧಾನ ಸಭೆಯಿಂದ ಚುನಾಯಿತರಾದವರು)

ಉತ್ತರಿಸಬೇಕಾದ ದಿನಾಂಕ : 20.09.2021

ಉತ್ತರಿಸುವ ಸಚಿವರು : ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು.

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದಡಿ ವಿದ್ಯುತ್ ನಿಗಮಗಳನ್ನು ಖಾಸಗೀಕರಣಗೊಳಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; ಹಾಗಿದ್ದಲ್ಲಿ, ಯಾವ ಹಂತದಲ್ಲಿ ಖಾಸಗೀಕರಣಗೊಳಿಸಲಾಗುತ್ತದೆ; (ಈ ಕುರಿತಂತೆ ರೂಪಿಸಿರುವ ನಿಯಮಾವಳಿಗಳು ಸೇರಿದಂತೆ ಸಂಪೂರ್ಣ ಮಾಹಿತಿ ಒದಗಿಸುವುದು) | ಸರ್ಕಾರದ ಮುಂದೆ ಪ್ರಸ್ತಾವನೆ ಇರುವುದಿಲ್ಲ. |
| ಆ) | ರೈತರ ಪಂಪ್‌ಸೆಟ್‌ಗಳಿಗೆ ನೀಡುತ್ತಿರುವ ಉಚಿತ ವಿದ್ಯುತ್ ನ್ನು ಪುನರ್ ಪರಿಶೀಲನೆ ಮಾಡುತ್ತಿರುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ; (ಸಂಪೂರ್ಣ ಮಾಹಿತಿ ಒದಗಿಸುವುದು) | |
| ಇ) | ಒಂದು ವೇಳೆ ಇದ್ದಲ್ಲಿ, ಈಗಾಗಲೇ ಬೆಳೆ ಹಾನಿಯಿಂದ ನಷ್ಟ ಬಡತನದಿಂದ ಹೈರಾಣಾಗಿರುವ ರೈತರು ಆತ್ಮಹತ್ಯೆಯಂತಹ ಕ್ರಮಗಳ ಕುರಿತು ಕಠಿಣ ನಿರ್ಧಾರ ಕೈಗೊಳ್ಳುವ ಸಂಬಂಧ ಇದ್ದು, ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ನಿರಂತರ ಉಚಿತ ವಿದ್ಯುತ್ ನ್ನು ಮುಂದುವರಿಸಲು ಕ್ರಮ ಕೈಗೊಳ್ಳಲಾಗುವುದೇ? (ಸಂಪೂರ್ಣ ವಿಸ್ಕೃತ ಮಾಹಿತಿ ಒದಗಿಸುವುದು) | |

ಸಂಖ್ಯೆ: ಎನರ್ಜಿ 218 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ
ಮತ್ತು ಸಂಸ್ಕೃತಿ ಸಚಿವರು.

ಕರ್ನಾಟಕ ವಿಧಾನ ಪರಿಷತ್ತು

144ನೇ ಅಧಿವೇಶನ -2021

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ. | 766(905) |
| ಮಾನ್ಯ ಸದಸ್ಯರ ಹೆಸರು | ಶ್ರೀ ಕಾಂತರಾಜ್(ಬಿಎಂಎಲ್)(ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ಸಚಿವರು | ಮಾನ್ಯ ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ, ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು |
| ಉತ್ತರಿಸಬೇಕಾದ ದಿನಾಂಕ | 20.09.2021 |

| | ಪ್ರಶ್ನೆ | ಉತ್ತರ |
|---|---|---|
| ಅ | ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯಕ್ಕೆ ಪ್ರಥಮ ಕುಲಪತಿಗಳನ್ನಾಗಿ ನೇಮಕ ಮಾಡಲಾಗಿದೆ ಯಾರನ್ನು ಮತ್ತು ಯಾವಾಗ ಇವರ ಹಾಜರಾದ ದಿನಾಂಕದಿಂದ ಇಲ್ಲಿಯವರೆಗೆ ಸರ್ಕಾರ ಎಷ್ಟು ಹಣವನ್ನು ಯಾವ ಉದ್ದೇಶಕ್ಕಾಗಿ ಬಿಡುಗಡೆ ಮಾಡಲಾಗಿದೆ;(ವಿವರವಾದ ಮಾಹಿತಿ ನೀಡುವುದು) | ಬೆಂಗಳೂರು ವಿಶ್ವವಿದ್ಯಾಲಯದ ನಿವೃತ್ತ ಪ್ರಾಧ್ಯಾಪಕರಾದ ಡಾ.ಎಲ್.ಗೋಮತಿದೇವಿ ಇವರನ್ನು ಸರ್ಕಾರದ ಅಧಿಸೂಚನೆ ಸಂಖ್ಯೆ:ಇಡಿ 236 ಯುಆರ್‌ಸಿ 2019(ಭಾಗ-1), ದಿನಾಂಕ:07.11.2020ರನ್ವಯ ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳನ್ನಾಗಿ ನೇಮಕ ಮಾಡಲಾಗಿದೆ. ಡಾ.ಎಲ್.ಗೋಮತಿದೇವಿ ಇವರು ಸೋಮವಾರ, ದಿನಾಂಕ:09.11.2020ರ ಪೂರ್ವಾಹ್ನ ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯದ ಪ್ರಥಮ ಕುಲಪತಿಗಳ ಹುದ್ದೆಯಲ್ಲಿ ಹಾಜರಾಗಿರುತ್ತಾರೆ.<br>2021-22 ನೇ ಆರ್ಥಿಕ ವರ್ಷದ ಆಯವ್ಯಯದಲ್ಲಿ ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯಕ್ಕೆ ನಿಗದಿಮಾಡಲಾಗಿರುವ ರೂ.50.00 ಲಕ್ಷಗಳ ಪೈಕಿ ಮೊದಲನೇ ತ್ರೈಮಾಸಿಕ ಕಂತಿನ ರೂಪದಲ್ಲಿ ರೂ. 12.50 ಲಕ್ಷಗಳ ಅನುದಾನವನ್ನು ಅಭಿವೃದ್ಧಿ/ಸಾಮಾನ್ಯ/ಆಸ್ತಿ ಸೃಜನೆಯ ಉದ್ದೇಶಗಳಿಗಾಗಿ ಬಿಡುಗಡೆ ಸರ್ಕಾರದ ಆದೇಶ ಸಂಖ್ಯೆ:ಇಡಿ/72/ಹೆಚ್‌ಪಿಯು/2021, ದಿ:28.07.2021ರನ್ವಯ ಬಿಡುಗಡೆಗೊಳಿಸಲಾಗಿದೆ. |
| ಆ | ಸರ್ಕಾರ ಬಿಡುಗಡೆ ಮಾಡಿದ ಹಣವನ್ನು ಯಾವ ಯಾವ ಉದ್ದೇಶ/ಕಾರ್ಯಕ್ರಮ/ಕಾಮಗಾರಿಗಳು ಸೇರಿದಂತೆ ಖರ್ಚು ಮಾಡಲಾಗಿದೆ; ಬಾಕಿ ಉಳಿದಿರುವ ಹಣವೆಷ್ಟು (ವಿವರವಾದ ಮಾಹಿತಿ ನೀಡುವುದು); | 2021-22ನೇ ಆರ್ಥಿಕ ಸಾಲಿನ ಮೊದಲ ತ್ರೈಮಾಸಿಕದಲ್ಲಿ ಸರ್ಕಾರದಿಂದ ಬಿಡುಗಡೆಗೊಳಿಸಲಾದ ರೂ. 12.50 ಲಕ್ಷಗಳ ಅನುದಾನವು ಮಹಾರಾಣಿ ಕ್ಲಸ್ಟರ್ ವಿಶ್ವವಿದ್ಯಾಲಯದ ಬ್ಯಾಂಕ್ ಖಾತೆಗೆ ಸಂದಾಯಯವಾಗುತ್ತಿದ್ದಂತೆಯೇ ವಿವಿಧ ಅಭಿವೃದ್ಧಿ ಕಾರ್ಯಗಳಿಗಾಗಿ ವಿನಿಯೋಗಿಸಲಾಗುವುದು. |

--2

| | | |
|---|---|---|
| ಇ | ಮಹಾರಾಣಿ ಕ್ಲಷ್ಟರ್ ವಿಶ್ವವಿದ್ಯಾಲಯದಲ್ಲಿ ಗುತ್ತಿಗೆ/ಸಂಚಿತ ಅಡಿಯಲ್ಲಿ ಕಾರ್ಯನಿರ್ವಹಿಸುತ್ತಿದ್ದ ಬೋಧಕ, ಬೋಧಕೇತರ ಸಿಬ್ಬಂದಿಗಳಿಗೆ ಕಳೆದ 10-12 ತಿಂಗಳುಗಳ ಬಾಕಿ ವೇತನ ನೀಡದೆ ಏಕಾಏಕಿ ಅವುರುಗಳನ್ನು ತೆಗೆದು ಹಾಕಿರುವುದು ನಿಜವೇ; ಈ ಸಂಬಂಧ ಸರ್ಕಾರ ಈ ಹಿಂದೆ ಸದನದಲ್ಲಿ ವೇತನ ಪಾವತಿ ಮಾಡುವುದಾಗಿ ಭರವಸೆ ನೀಡಿರುವುದು ನಿಜವೇ; | ಪ್ರಥಮ ಕುಲಪತಿಯನ್ನು ನೇಮಿಸುವವರೆಗೆ, ಏಕಾತ್ಮಕ ಸ್ವರೂಪದ ಮಹಾರಾಣಿ ಕ್ಲಷ್ಟರ್ ವಿಶ್ವವಿದ್ಯಾಲಯದ ಸ್ಥಾಪನೆಗೆ ಕ್ರಮಗಳನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ನೇಮಿಸಲಾಗಿದ್ದ ವಿಶೇಷಾಧಿಕಾರಿಯು ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ (ತಿದ್ದುಪಡಿ) ಅಧಿನಿಯಮ 2019(2019ರ ಕರ್ನಾಟಕ ಅಧಿನಿಯಮ ಸಂಖ್ಯೆ:15)ರ ಪ್ರಕರಣ 17ರಲ್ಲಿ ಉಪಬಂಧಿಸುವ ಮೇರೆಗೆ, ರಾಜ್ಯ ಸರ್ಕಾರವು ನಿರ್ದಿಷ್ಟಪಡಿಸಬಹುದಾದಂತೆ ಅನುಕ್ರಮವಾಗಿ ವಿಶ್ವವಿದ್ಯಾಲಯದ ಮತ್ತು ಕುಲಪತಿಗಳ ಅಂಥ ಅಧಿಕಾರಗಳನ್ನು ಚಲಾಯಿಸಬೇಕಾಗುತ್ತದೆ ಹಾಗೂ ಅಂಥ ಹಾಗೂ ಅಂಥ ಪ್ರಕಾರ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಆದರೆ ಸರ್ಕಾರವು ಅಂಥ ಅಧಿಕಾರಗಳನ್ನು ನಿರ್ದಿಷ್ಟಪಡಿಸಿರದಿದ್ದ ಸನ್ನಿವೇಶದಲ್ಲಿ ಸರ್ಕಾರದ ಪೂರ್ವಾನುಮೋದನೆಯನ್ನು ಪಡೆಯದೇ ಹಾಗೂ ಸರ್ಕಾರದ ಗಮನಕ್ಕೆ ತಾರದೇ ಮತ್ತು ವೇತನ ಪಾವತಿಗೆ ಹಣಕಾಸಿನ ಅವಕಾಶ ಕಲ್ಪಿಸಿಕೊಳ್ಳದೇ ವಿಶೇಷಾಧಿಕಾರಿಗಳು ತಾತ್ಕಾಲಿಕ ಬೋಧಕ ಹಾಗೂ ಬೋಧಕೇತರ ಸಿಬ್ಬಂದಿಯನ್ನು ನೇಮಿಸಿಕೊಂಡಿರುತ್ತಾರೆ.<br><br>ಮುಂದುವರೆದು, ಬೋಧಕೇತರ ಸಿಬ್ಬಂದಿಯನ್ನು ತಾತ್ಕಾಲಿಕವಾಗಿ ಗುತ್ತಿಗೆ ಆಧಾರದ ಮೇಲೆ ನೇಮಿಸಿಕೊಳ್ಳಲಾಗಿರುವುದಕ್ಕೆ ಸಂಬಂಧಿಸಿದಂತೆ ಯಾವುದೇ ಆದೇಶಗಳು ಹಾಗೂ ಹೊರ ಗುತ್ತಿಗೆ ಸಂಬಂಧಿ ದಾಖಲೆಗಳಾಗಲೀ ಮಹಾರಾಣಿ ಕ್ಲಷ್ಟರ್ ವಿಶ್ವವಿದ್ಯಾಲಯದಲ್ಲಿ ಲಭ್ಯವಿರುವುದಿಲ್ಲ.<br><br>ಖಾಯಂ ನೇಮಕಾತಿಗೆ ಅನ್ವಯವಾಗುವ ಕ್ರಮಪದ್ಧತಿ, ಮೀಸಲಾತಿ ನೀತಿ ಹಾಗೂ ಅರ್ಹತಾ ಷರತ್ತುಗಳನ್ನು ಅನ್ವಯಿಸಿ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ರ ಪ್ರಕರಣ-55ರನ್ವಯ 1 ವರ್ಷದ ಅವಧಿಗೆ ಮೀರದಂತೆ ಮಾತ್ರ ಅರೆಕಾಲಿಕ ಅಥವಾ ಅತಿಥಿ ಬೋಧಕ ಸಿಬ್ಬಂದಿಯನ್ನು ನೇಮಕಾತಿ ಮಾಡಿಕೊಳ್ಳಲಾಗುತ್ತದೆ. ಈ ವಿಧಾನ ತಾತ್ಕಾಲಿಕ ಬೋಧಕೇತರ ಹುದ್ದೆಗಳ ನೇಮಕಾತಿಗೂ ಅನ್ವಯಿಸುತ್ತದೆ. ಈ ಹಿನ್ನೆಲೆಯಲ್ಲಿ, 1 ವರ್ಷದ ಅವಧಿಯು ಮುಕ್ತಾಯಗೊಂಡ ನಂತರ ಅತಿಥಿ ಉಪನ್ಯಾಸಕರನ್ನು ಬಿಡುಗಡೆಗೊಳಿಸಲಾಗಿದೆ.<br><br>ಬೋಧಕ/ಬೋಧಕೇತರ ಸಿಬ್ಬಂದಿಗೆ ವೇತನ ಪಾವತಿಯಾಗದ ಬಗ್ಗೆ ಸರ್ಕಾರಕ್ಕೆ ಗಮನಕ್ಕೆ ಬಂದ ತಕ್ಷಣ, ಅವರ ವೇತನ |

| | | |
|---|---|---|
| | | ಪಾವತಿಯ ನಿಟ್ಟಿನಲ್ಲಿ ಉಪಕ್ರಮಿಸಲಾಗಿದೆ ಎಂದು ಮಾತ್ರ ಸದನದಲ್ಲಿ ತಿಳಿಸಲಾಗಿತ್ತು. ತದನುಸಾರ, ಈ ಉದ್ದೇಶಕ್ಕಾಗಿ ಆರ್ಥಿಕ ಇಲಾಖೆಯೊಂದಿಗೆ ಸಮಾಲೋಚಿಸಲಾಗಿದ್ದು, ಆದರೆ ನಿರೀಕ್ಷಿತ ಪ್ರತಿಕ್ರಿಯೆ ವ್ಯಕ್ತವಾಗಿರುವುದಿಲ್ಲ. ಆದುದರಿಂದ, ಉನ್ನತ ಶಿಕ್ಷಣ ಇಲಾಖೆಯ ಯೋಜನಾ ಶಾಖೆ ಹಾಗೂ ಆರ್ಥಿಕ ಇಲಾಖೆಯೊಂದಿಗೆ ಮರು ಸಮಾಲೋಚಿಸಲಾಗುತ್ತಿದೆ. |
| ಈ | ಸರ್ಕಾರ ಭರವಸೆ ನೀಡಿದ್ದರೂ ಇಲ್ಲಿಯವರೆಗೂ ಇವರಿಗೆ ಬಾಕಿ ವೇತನ ನೀಡದಿರಲು ಕಾರಣಗಳೇನು; | |
| | ಸರ್ಕಾರವು ಯಾವ ಕಾಲಮಿತಿಯೊಳಗೆ ಇವರಿಗೆ ಬಾಕಿ ವೇತನ ಪಾವತಿಸುವುದರೊಂದಿಗೆ ಹಾಲಿ ಕೆಲಸ ನಿರ್ವಹಿಸುತ್ತಿರುವ ಹುದ್ದೆಯಲ್ಲಿಯೇ ಮುಂದುವರೆಸಲು ಆದೇಶ ಹೊರಡಿಸುವುದು? | ಕೋವಿಡ್-19 ಮಾರಕ ರೋಗದ ಪ್ರಸರಣೆಯಿಂದಾಗಿ ಎದುರಾಗಿರುವ ಆರ್ಥಿಕ ಸವಾಲುಗಳ ಹಿನ್ನೆಲೆಯಲ್ಲಿ ಬಾಕಿ ವೇತನ ಪಾವತಿಗೆ ಕಾಲಮಿತಿ ನಿಗದಿಪಡಿಸುವುದು ಕಷ್ಟಸಾಧ್ಯವಾಗುತ್ತದೆ.<br><br>**Secretary, State of Karnataka & Ors V/s Umadevi & Ors [(2006) 4 SCC 1]** ಪ್ರಕರಣದಲ್ಲಿ ಪ್ರತಿಪಾದಿಸಿರುವಂತೆ, ತಾತ್ಕಾಲಿಕ, ಪ್ರಾಸಂಗಿಕ ಅಥವಾ ಗುತ್ತಿಗೆ ನೇಮಕಾತಿಗಳ ಪರಿಣಾಮದ ಬಗ್ಗೆ ಅರಿವನ್ನು ಹೊಂದಿರುವ ವ್ಯಕ್ತಿಯು ಅಂತಹ ನೇಮಕಾತಿಗಳ ಸಂಬಂಧದಲ್ಲಿ ಔರಸ ನಿರೀಕ್ಷಣೆ ತತ್ವವನ್ನು ಆಧರಿಸಲು ಅವಕಾಶವಿರುವುದಿಲ್ಲ. ಆದುದರಿಂದ, ತಾತ್ಕಾಲಿಕ ಸೇವೆಯಿಂದ ಈಗಾಗಲೇ ಬಿಡುಗಡೆಗೊಂಡವರನ್ನು ಮುಂದುವರೆಸಲು ಅವಕಾಶವಿರುವುದಿಲ್ಲ. ಆದರೆ, ಅಗತ್ಯತೆಗಳಿಗೆ ಅನುಗುಣವಾಗಿ ತಾತ್ಕಾಲಿಕ ನೇಮಕಾತಿಗೆ ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ, 2000ರಲ್ಲಿ ಗೊತ್ತುಪಡಿಸಲಾಗಿರುವ ಅವಕಾಶಗಳನ್ವಯ ಕುಲಪತಿಗಳಿಂದ ಕ್ರಮವಹಿಸಲಾಗುತ್ತದೆ. |

ಇಡಿ/302/ಯುಜಿವಿ/2021

(ಡಾ॥ ಅಶ್ವತ್ಥನಾರಾಯಣ ಸಿ.ಎನ್)

ಉನ್ನತ ಶಿಕ್ಷಣ, ಐಟಿ ಮತ್ತು ಬಿಟಿ, ವಿಜ್ಞಾನ ಮತ್ತು ತಂತ್ರಜ್ಞಾನ, ಕೌಶಲ್ಯಾಭಿವೃದ್ಧಿ,

ಉದ್ಯಮಶೀಲತೆ ಮತ್ತು ಜೀವನೋಪಾಯ ಸಚಿವರು